

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 53
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 15/07/2019
ಉತ್ತರಿಸುವ ಸಚಿವರು : ಮಾನ್ಯ ಸಮಾಜ ಕಲ್ಯಾಣ ಸಚಿವರು

| ಕ್ರಸ | ವಿಷಯ | ಉತ್ತರ |
|---|---|---|
| ಅ | ಇಲಾಖಾ ವ್ಯಾಪ್ತಿಯಲ್ಲಿನ ಮೊರಾರ್ಜಿ ವಸತಿ ಶಾಲೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ ಎಷ್ಟು; | 3506 ಖಾಯಂ ಶಿಕ್ಷಕರು ಮತ್ತು 2700 ಅತಿಥಿ ಶಿಕ್ಷಕರು/ಹೊರಸಂಪನ್ಮೂಲ ಶಿಕ್ಷಕರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಆ | ಎರಡು ವರ್ಷ ಸೇವಾವಧಿ ಪೂರೈಸಿ ಖಾಯಂ ಪೂರ್ವ ಸೇವಾವಧಿ ಪೂರ್ಣಗೊಂಡಿದ್ದರೂ ಇವರ ಪ್ರೊಬೇಷನರಿ ಅವಧಿ ಘೋಷಣೆಯಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ | ಇದ್ದಲ್ಲಿ, ಇವರ ಪ್ರೊಬೇಷನರಿ ಅವಧಿ ಘೋಷಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಪ್ರೊಬೇಷನರಿ ಅವಧಿ ಘೋಷಣೆ ಪೂರ್ವದಲ್ಲಿ ಹುದ್ದೆಗೆ ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ನಿಗಧಿತ ಅವಧಿಯಲ್ಲಿ ಉತ್ತೀರ್ಣರಾಗದೇ ಇರುವ ಹಾಗೂ ಶಿಸ್ತು ಪ್ರಕರಣಕ್ಕೆ ಒಳಪಟ್ಟ ಸಿಬ್ಬಂದಿಗಳ ಪರಿವೀಕ್ಷಣ ಅವಧಿ ಘೋಷಣೆಗೆ ವಿಳಂಬವಾಗಿರುತ್ತದೆ. ಅಂತಹ ಪ್ರಕರಣಗಳಲ್ಲಿ ಪರಿವೀಕ್ಷಣ ಅವಧಿಯನ್ನು ವಿಸ್ತರಿಸಿ ಘೋಷಿಸಲು ಕ್ರಮ ವಹಿಸಿದೆ. |
| ಈ | 2016 ಜೂನ್ ನಲ್ಲಿ ಕುಮಾರ್ ನಾಯಕ್ ವರದಿಯಂತೆ ಸರ್ಕಾರ ಪ್ರಾಥಮಿಕ, ಪ್ರೌಢ, ಪದವಿ ಪೂರ್ವ ಕಾಲೇಜುಗಳ ಶಿಕ್ಷಕರಿಗೆ ವಿಶೇಷ ಭತ್ಯೆ ನೀಡಿದಂತೆ ಸಮಾಜ ಕಲ್ಯಾಣ ಇಲಾಖೆಯ ಶಿಕ್ಷಕರಿಗೆ ವಿಶೇಷ ಭತ್ಯೆಯನ್ನು ನೀಡುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಕುಮಾರನಾಯಕ್ ವರದಿಯಂತೆ ಹೆಚ್ಚುವರಿ ವೇತನ ಬಡ್ತಿ ಮಂಜೂರಾತಿ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |

ಸಕಇ 81 ಮೊದೇಶಾ 2018

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು.